# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 520
ಸದಸ್ಯರ ಹೆಸರು : ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 16.12.2021
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಪ್ರಶ್ನೆ | ಉತ್ತರ |
|---|---|
| (ಅ) ರಾಜ್ಯ ಸರ್ಕಾರದ ವ್ಯಾಪ್ತಿಯಲ್ಲಿ ಬರುವ ನಿಗಮ / ಮಂಡಳಿ/ ಉದ್ಯಮ/ಅಂಗ ಸಂಸ್ಥೆ /ಸೊಸೈಟಿಗಳ ಸಿಬ್ಬಂದಿಗಳ ನೇಮಕಾತಿ , ಪದೋನ್ನತಿ, ಪ್ರಕ್ರಿಯೆ ಸಂಬಂಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ನೀಡಿರುವ ನಿರ್ದೇಶನಗಳೇನು | ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ 1978ರಡಿ ಸೇವಾ ಷರತ್ತುಗಳಿಗೆ ಸಂಬಂಧಿಸಿದ ನಿಯಮಗಳನ್ನು ರಚಿಸಲಾಗುವುದರಿಂದ ಇವು ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮಾತ್ರ ಅನ್ವಯವಾಗುತ್ತವೆ. |
| (ಆ) ರಾಜ್ಯ ಸರ್ಕಾರದ ವ್ಯಾಪ್ತಿಯಲ್ಲಿ ಬರುವ ನಿಗಮ / ಮಂಡಳಿ/ ಉದ್ಯಮ/ ಅಂಗ ಸಂಸ್ಥೆ / ಸೊಸೈಟಿಗಳ ಸಿಬ್ಬಂದಿಗಳ ನೇಮಕಾತಿ , ಪದೋನ್ನತಿ, ಪ್ರಕ್ರಿಯೆ ಸಂಬಂಧ ಆರ್ಥಿಕ ಇಲಾಖೆ ನೀಡಿರುವ ನಿರ್ದೇಶನಗಳೇನು; | ಆರ್ಥಿಕ ಇಲಾಖೆಯು ಸುತ್ತೋಲೆ ಸಂಖ್ಯೆ: ಆಇ 01 ಬಿಇಎಂ 2019, ದಿನಾಂಕ: 21.5.2019ರಲ್ಲಿ ನಿಗಮ/ ಮಂಡಳಿ/ ಸ್ವಾಯತ್ತ ಸಂಸ್ಥೆಗಳು/ ಪ್ರಾಧಿಕಾರಗಳು ಹಾಗೂ ಇನ್ನಿತರ ಸರ್ಕಾರದ ಸ್ವಾಮ್ಯಕ್ಕೊಳಪಡುವ ಸಂಸ್ಥೆಗಳು ಹಾಗೂ ಇಲಾಖೆಗಳಲ್ಲಿ ಹುದ್ದೆ ಸೃಜನೆ ಮತ್ತು ಭರ್ತಿ ಮಾಡುವ ಕುರಿತು ಕೆಲವು ಸೂಚನೆಗಳನ್ನು ನೀಡಿರುತ್ತದೆ. (ಪ್ರತಿ ಲಗತ್ತಿಸಿದೆ) |
| (ಇ) ಆರ್ಥಿಕ/ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ನೀಡಿರುವ ನಿರ್ದೇಶನಗಳನ್ನು ನಿಗಮ ಮತ್ತು ಮಂಡಳಿಗಳು ಪಾಲನೆ ಮಾಡುತ್ತಿವೆಯೆ ; ಇಲ್ಲದಿದ್ದಲ್ಲಿ ಯಾವ ಕ್ರಮ ತೆಗೆದುಕೊಳ್ಳಲಾಗಿದೆ | ಉದ್ಭವಿಸುವುದಿಲ್ಲ |
| (ಈ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತದಲ್ಲಿ ಕೇವಲ 240 ದಿನ ಕೆಲಸ ನಿರ್ವಹಿಸಿದ ಸಿಬ್ಬಂದಿಗಳನ್ನು ಖಾಯಂ ಮಾಡಲಾಗಿದ್ದು ಈ ನಿಯಮವನ್ನು ರಾಜ್ಯದ ಎಲ್ಲಾ ನಿಗಮ/ ಮಂಡಳಿ/ ಉದ್ಯಮ/ ಅಂಗ ಸಂಸ್ಥೆ / ಸೊಸೈಟಿಗಳಿಗೂ ವಿಸ್ತರಿಸಿ ಆದೇಶ ಮಾಡಲಾಗುವುದೆ? | ಇಲ್ಲ |

ಸಂಖ್ಯೆ: ಸಿಆಸುಇ 207 ಸೇನೆನಿ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

## ಕರ್ನಾಟಕ ಸರ್ಕಾರ

ಸಂಖ್ಯೆ : ಆಇ 01 ಬಿಇಎಂ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿ: 21.05.2019

### ಸುತ್ತೋಲೆ

ವಿಷಯ:- ನಿಗಮ /ಮಂಡಳಿ/ಸ್ವಾಯುತ್ತ ಸಂಸ್ಥೆಗಳು/ಪ್ರಾಧಿಕಾರಗಳು ಹಾಗೂ ಇನ್ನಿತರ ಸರ್ಕಾರದ ಸ್ವಾಮ್ಯಕ್ಕೊಳಪಡುವ ಸಂಸ್ಥೆಗಳು ಹಾಗೂ ಇಲಾಖೆಗಳಲ್ಲಿ ಹುದ್ದೆ ಸೃಜನೆ ಮತ್ತು ಭರ್ತಿ ಮಾಡುವ ಕುರಿತು ಸ್ಪಷ್ಟೀಕರಣ.

---

ರಾಜ್ಯದಲ್ಲಿನ ವಿವಿಧ ನಿಗಮ /ಮಂಡಳಿ/ಸ್ವಾಯುತ್ತ ಸಂಸ್ಥೆಗಳು/ಪ್ರಾಧಿಕಾರಗಳು ಹಾಗೂ ಇನ್ನಿತರ ಸರ್ಕಾರದ ಸ್ವಾಮ್ಯಕ್ಕೊಳಪಡುವ ಸಂಸ್ಥೆಗಳು ಹಾಗೂ ಇಲಾಖೆಗಳು ಸಂಬಂಧಪಟ್ಟ ಆರ್ಥಿಕ ಸಮಿತಿ ಮತ್ತು ಆಡಳಿತ ಪರಿಷತ್ತುಗಳ (Finance Committee& Governing Council) ಸಭೆಗಳಲ್ಲಿ ಅನುಮೋದನೆಯನ್ನು ಪಡೆದು ಹುದ್ದೆಗಳನ್ನು ಸೃಜಿಸಲು ಮತ್ತು ಭರ್ತಿ ಮಾಡಲು ಕ್ರಮ ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಇಂತಹ ಸಭೆಗಳಲ್ಲಿ ತೆಗೆದುಕೊಂಡ ತೀರ್ಮಾನವನ್ನು ಸರ್ಕಾರದ ಅನುಮೋದನೆಯೆಂದು ಪರಿಗಣಿಸಲು ಬರುವುದಿಲ್ಲ.

ಯಾವುದೇ ನಿಗಮ / ಮಂಡಳಿ / ಸ್ವಾಯುತ್ತ ಸಂಸ್ಥೆಗಳು / ಪ್ರಾಧಿಕಾರಗಳು ಹಾಗೂ ಇನ್ನಿತರ ಸರ್ಕಾರದ ಸ್ವಾಮ್ಯಕ್ಕೊಳಪಡುವ ಸಂಸ್ಥೆಗಳು ಹಾಗೂ ಇಲಾಖೆಗಳಲ್ಲಿ ಹುದ್ದೆಗಳ ಸೃಜನೆ ಮತ್ತು ಭರ್ತಿಯನ್ನು ಮಾಡಬೇಕಾದರೆ ಕರ್ನಾಟಕ ವ್ಯವಹಾರಗಳ ಹಂಚಿಕೆ ನಿಯಮಗಳನ್ವಯ ಆರ್ಥಿಕ ಇಲಾಖೆಯ ಅನುಮತಿ ಪಡೆಯುವುದು ಕಡ್ಡಾಯವಾಗಿರುತ್ತದೆ. ಆದರೆ ನಿಗಮ / ಮಂಡಳಿ/ ಸ್ವಾಯುತ್ತ ಸಂಸ್ಥೆಗಳು / ಪ್ರಾಧಿಕಾರಗಳು ಹಾಗೂ ಇನ್ನಿತರ ಸರ್ಕಾರದ ಸ್ವಾಮ್ಯಕ್ಕೊಳಪಡುವ ಸಂಸ್ಥೆಗಳು ಹಾಗೂ ಇಲಾಖೆಗಳು ಈ ರೀತಿ ಮಾಡದೆ ತಮ್ಮ ಹಂತದಲ್ಲಿಯೇ ಸಭೆಗಳನ್ನು ನಡೆಸಿ ಹುದ್ದೆ ಸೃಜನೆ ಮತ್ತು ಭರ್ತಿ ಮಾಡುತ್ತಿರುವುದು ನಿಯಮಾನುಸಾರ ಇರುವುದಿಲ್ಲ.

ಆರ್ಥಿಕ ಇಲಾಖೆಯು ಲಭ್ಯ ಮಾಹಿತಿಯ ಅನುಸಾರ ಆಯವ್ಯಯದಲ್ಲಿ, ಹುದ್ದೆಗಳಿಗೆ ಅಗತ್ಯವಾದ ವೇತನ, ಭತ್ಯೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಸೂಕ್ತ ಅನುದಾನ ಕಲ್ಪಿಸುತ್ತದೆ. ಆದರೆ ಆರ್ಥಿಕ ಇಲಾಖೆಯ ಗಮನಕ್ಕೆ ತರದೆ ಹುದ್ದೆಗಳನ್ನು ಸೃಜನೆ/ಭರ್ತಿ ಮಾಡಿಕೊಂಡಲ್ಲಿ ಹೆಚ್ಚಿನ ಆರ್ಥಿಕ ಹೊರೆ ಉಂಟಾಗಿ ಆಯವ್ಯಯದ ಅನುದಾನದಲ್ಲಿ ಕೊರತೆ ಉಂಟಾಗಿ, ಆರ್ಥಿಕ ಶಿಸ್ತು ಸಡಿಲವಾಗುವುದಲ್ಲದೆ ಅನಾವಶ್ಯಕ ತೊಂದರೆ ಉಂಟಾಗುತ್ತದೆ.

ಆದುದರಿಂದ, ಇನ್ನು ಮುಂದೆ ನಿಗಮ/ಮಂಡಳಿ/ಸ್ವಾಯುತ್ತ ಸಂಸ್ಥೆಗಳು/ಪ್ರಾಧಿಕಾರಗಳು ಹಾಗೂ ಇನ್ನಿತರ ಸರ್ಕಾರದ ಸ್ವಾಮ್ಯಕ್ಕೊಳಪಡುವ ಸಂಸ್ಥೆಗಳು ಹಾಗೂ ಇಲಾಖೆಗಳಲ್ಲಿ ಹುದ್ದೆ ಸೃಜನೆ / ಭರ್ತಿ ಮಾಡಬೇಕಾದಲ್ಲಿ ಸಂಬಂಧಪಟ್ಟ ಎಫ್.ಸಿ & ಜಿ.ಸಿ ಸಭೆಗಳ ಅನುಮೋದನೆ ಪಡೆದ ನಂತರ ಇಲಾಖಾ ಮುಖ್ಯಸ್ಥರಾದ ಅಪರ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ಶಿಫಾರಸ್ಸಿನೊಂದಿಗೆ ಕಡ್ಡಾಯವಾಗಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿ, ಆರ್ಥಿಕ ಇಲಾಖೆಯ ಅನುಮತಿಯನ್ನು ಪಡೆದ ನಂತರವೇ ಹುದ್ದೆಗಳ ಸೃಜನೆ/ಭರ್ತಿಗೆ ಕ್ರಮ ವಹಿಸತಕ್ಕದ್ದು. ಯಾವುದೇ ಕಾರಣಕ್ಕೂ ಈ ಸೂಚನೆಗಳ ಉಲ್ಲಂಘನೆ ಆಗತಕ್ಕದ್ದಲ್ಲ.

ಈ ಹಿಂದೆ ಆರ್ಥಿಕ ಇಲಾಖೆಯ ಅನುಮತಿಯನ್ನು ಪಡೆಯದೆ ಹುದ್ದೆಗಳನ್ನು ಸೃಜಿಸಿ / ಭರ್ತಿ ಮಾಡಿಕೊಂಡ ಪ್ರಕರಣಗಳು ಕಂಡು ಬಂದಲ್ಲಿ ಅಂತಹ ಪ್ರಕರಣಗಳನ್ನು ಕೂಡಲೇ ಇಲಾಖಾ

ಮುಖ್ಯಸ್ಥರಾದ ಅಪರ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ಮೂಲಕ ಆರ್ಥಿಕ ಇಲಾಖೆಯ ಗಮನಕ್ಕೆ ತರತಕ್ಕದ್ದು.

ಮೇಲ್ಕಂಡ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸುವಂತೆ ತಿಳಿಸಿದೆ. ಈ ಸೂಚನೆಗಳ ಉಲ್ಲಂಘನೆಗೆ/ ಲೋಪಗಳಿಗೆ ಹಾಗೂ ಅದರ ಪರಿಣಾಮಗಳಿಗೆ ಆಯಾ ನಿಗಮ / ಮಂಡಳಿಗಳು/ ಸ್ವಾಯುತ್ತ ಸಂಸ್ಥೆಗಳು / ಪ್ರಾಧಿಕಾರಗಳು ಹಾಗೂ ಇನ್ನಿತರ ಸರ್ಕಾರದ ಸ್ವಾಮ್ಯಕೊಳಪಡುವ ಸಂಸ್ಥೆಗಳು ಹಾಗೂ ಇಲಾಖೆಗಳ ಮುಖ್ಯಸ್ಥರು ಜವಾಬ್ದಾರರಾಗುವರು.

ಮೇಲಿನ ಸೂಚನೆಗಳನ್ನು ತಮ್ಮ ವ್ಯಾಪ್ತಿಯಲ್ಲಿ ಬರುವ ನಿಗಮ /ಮಂಡಳಿ/ಸ್ವಾಯುತ್ತ ಸಂಸ್ಥೆಗಳು/ಪ್ರಾಧಿಕಾರಗಳು ಹಾಗೂ ಇನ್ನಿತರ ಸರ್ಕಾರದ ಸ್ವಾಮ್ಯಕೊಳಪಡುವ ಸಂಸ್ಥೆಗಳು ಹಾಗೂ ಇಲಾಖೆಗಳ ಗಮನಕ್ಕೆ ತರುವಂತೆ ಸರ್ಕಾರದ ಎಲ್ಲಾ ಅಪರ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳನ್ನು ಕೋರಲಾಗಿದೆ.

(ಐ.ಎಸ್.ಎನ್. ಪ್ರಸಾದ್)
ಅಪರ ಮುಖ್ಯ ಕಾರ್ಯದರ್ಶಿ
ಆರ್ಥಿಕ ಇಲಾಖೆ

ಇವರಿಗೆ:-

1. ಸರ್ಕಾರದ ಅಪರ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು.
2. ಸರ್ಕಾರದ ಎಲ್ಲಾ ಇಲಾಖಾಮುಖ್ಯಸ್ಥರು.
3. ಆರ್ಥಿಕ ಇಲಾಖೆಯ ಸರ್ಕಾರದ ಜಂಟಿಕಾರ್ಯದರ್ಶಿ/ಉಪಕಾರ್ಯದರ್ಶಿ/ ವಿಶೇಷಾಧಿಕಾರಿ ಮತ್ತು ಅಧೀನ ಕಾರ್ಯದರ್ಶಿಗಳು.